ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ: 14ನೇ ಡಿಸೆಂಬರ್, 2020

ವಸತಿ ಶಾಲೆಗಳ ಸಹ ಶಿಕ್ಷಕರುಗಳಿಗೆ ಬಡ್ತಿ ನೀಡುವ ಕುರಿತು

ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀಧರರ ಕ್ಷೇತ್ರ) -

89(618) ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಸಮಾಜ ಕಲ್ಯಾಣ ಇಲಾಖೆಯ ಕ್ರೈಸ್ ಸಂಘದ ಖಾಯಂ ಸಿಬ್ಬಂದಿಗಳಿಗೆ ಮಾನ್ಯ ಉಚ್ಚ ನ್ಯಾಯಾಲಯದ ಧಾರವಾಡ ಪೀಠ ಮತ್ತು ಸರ್ಕಾರವು ಜಾರಿ ಮಾಡಿದ ಆದೇಶದಂತೆ, ವಸತಿ ಶಾಲಾ ನೌಕರರಿಗೆ ಮುಂಬಡ್ತಿ ನೀಡಲು ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು;

(ಆ) ಕರ್ನಾಟಕ ನಾಗರೀಕ ಸೇವಾ ನಿಯಮ-1957ರ ಸೇವಾ ಜೇಷ್ಠತಾ ನಿಯಮಗಳು ಕ್ರೈಸ್ ನೌಕರರಿಗೆ ಅನ್ವಯಿಸುತ್ತವೆಯೇ; (ವಿವರ ನೀಡುವುದು)

(ಇ) ಕ್ರೈಸ್ ಸಂಸ್ಥೆಯ ವಸತಿ ಶಾಲೆಗಳ ಸಹ ಶಿಕ್ಷಕರುಗಳ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ಪ್ರಕಟಿಸಲಾಗಿದೆಯೇ; ಇಲ್ಲವಾದಲ್ಲಿ, ಜೇಷ್ಠತಾ ಪಟ್ಟಿ ತಯಾರಿಸುವಲ್ಲಿ ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು;

(ಈ) ಜೇಷ್ಠತಾ ಪಟ್ಟಿಯ ಅನುಸಾರ ಸದರಿ ಸಹ ಶಿಕ್ಷಕರುಗಳಿಗೆ ಪ್ರಾಂಶುಪಾಲರ ಹುದ್ದೆಗೆ ಬಡ್ತಿ ನೀಡುವುದಕ್ಕೆ ಸರ್ಕಾರ ಕ್ರಮ ಕೈಗೊಂಡಿದೆಯೇ; ಇಲ್ಲವಾದಲ್ಲಿ, ಕಾರಣವೇನು:

(ಉ) ಖಾಲಿಯಿರುವ ಪ್ರಾಂಶುಪಾಲರ ಹುದ್ದೆಗಳಿಗೆ ಪ್ರತಿಶತ ಹುದ್ದೆಗಳನ್ನು ಮೀಸಲಿರಿಸಿ, ಸಹಶಿಕ್ಷಕರುಗಳನ್ನು ಪ್ರಾಂಶುಪಾಲರ ಹುದ್ದೆಗೆ ಬಡ್ತಿ ನೀಡಲಾಗುವುದೇ?